# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 62
ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 21.09.2020
ಉತ್ತರಿಸುವವರು : ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 1976ರಲ್ಲಿ ಹೊರಡಿಸಲಾದ ಅಧಿಸೂಚನೆಯ ಮೇರೆಗೆ ರಾಜ್ಯದಲ್ಲಿ ವೃಕ್ಷ ಸಂರಕ್ಷಣಾ ಕಾಯಿದೆಯ ವ್ಯಾಪ್ತಿಯಡಿ ಇದ್ದ 65 ನಗರ ಪ್ರದೇಶಗಳು ಯಾವುವು; | 1976ರಲ್ಲಿ ಹೊರಡಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಎಫ್‌ಡಿ 100 ಎಫ್‌ಡಿಪಿ 1976 (1) ದಿನಾಂಕ: 20.07.1976 ರ ಮೇರೆಗೆ ರಾಜ್ಯದಲ್ಲಿ ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ, 1976 ರ ವ್ಯಾಪ್ತಿಯಡಿ ಇದ್ದ 65 ನಗರ ಪ್ರದೇಶಗಳ ಪಟ್ಟಿಯನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಆ) | ಹೊಸ ಕಾಯಿದೆ ಜಾರಿಯಾದ ನಂತರ ಎಷ್ಟು ನಗರ ಪ್ರದೇಶಗಳನ್ನು ಯಾವ ಮಾನದಂಡದ ಅಡಿಯಲ್ಲಿ ಹೊಸದಾಗಿ ಸೇರ್ಪಡಿಸಲಾಗಿದೆ; | ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 129 ಎಫ್‌ಎಎಫ್ 2018 ದಿನಾಂಕ 24.05.2019ರನ್ವಯ 252 ನಗರ ಪ್ರದೇಶಗಳನ್ನು ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ 1976ರ ವ್ಯಾಪ್ತಿಗೊಳಪಡಿಸಿ ಆದೇಶಿಸಲಾಗಿದೆ.<br><br>ಕೈಗಾರೀಕರಣ ಹಾಗೂ ಹೆಚ್ಚಿದ ಜನಸಂಖ್ಯೆಯ ಒತ್ತಡದಿಂದ ನಗರ ಪ್ರದೇಶಗಳಲ್ಲಿನ ವೃಕ್ಷ ಸಂಪತ್ತಿಗೆ ಅಪಾರ ಹಾನಿ ಉಂಟಾಗುತ್ತದೆ. ಮರಗಳು ನೆರಳು ಒದಗಿಸುವುದಲ್ಲದೆ, ಪ್ರಾಕೃತಿಕ ಸೌಂದರ್ಯವನ್ನು ಹೆಚ್ಚಿಸುವುದು, ಕಲುಷಿತ ವಾತಾವರಣವನ್ನು ಶುದ್ಧಗೊಳಿಸುವುದು, ಶಬ್ದ ಮಾಲಿನ್ಯ ನಿಯಂತ್ರಿಸಿ, ನಗರ ಪ್ರದೇಶಗಳನ್ನು ಮಾಲಿನ್ಯ ರಹಿತವಾಗಿ ಉಳಿಸಿಕೊಳ್ಳಲು ಸಹಾಯಕವಾಗಿರುತ್ತವೆ. 1976ರ ನಂತರ ರಾಜ್ಯದಲ್ಲಿನ ನಗರ ಪ್ರದೇಶಗಳು ಹಾಗೂ ಅವುಗಳ ವ್ಯಾಪ್ತಿ ಗಣನೀಯವಾಗಿ ಹೆಚ್ಚಿರುತ್ತದೆ. ನಗರ ಪ್ರದೇಶಗಳಲ್ಲಿ ವಿವೇಚನಾ ರಹಿತವಾದ ಮರಗಳ ಕತ್ರಾವಣೆಯನ್ನು ತಡೆಗಟ್ಟಲು ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ 1976 ರಲ್ಲಿನ ಎಲ್ಲಾ ಅವಕಾಶಗಳು ರಾಜ್ಯದಲ್ಲಿನ ಎಲ್ಲಾ ನಗರ ಪ್ರದೇಶಗಳಿಗೆ ಅನ್ವಯಿಸುವುದು ಅವಶ್ಯಕವಾಗಿರುತ್ತದೆ. ಈ ಹಿಂದೆ 1976 ರಲ್ಲಿನ ಸರ್ಕಾರದ ಅಧಿಸೂಚನೆಯು ರಾಜ್ಯದಲ್ಲಿನ 65 ನಗರ ಪ್ರದೇಶಗಳಿಗೆ ಮಾತ್ರ ಅನ್ವಯವಾಗುತ್ತಿತ್ತು. ಪ್ರಸ್ತುತ ಈ ಕಾಯ್ದೆಯನ್ನು 252 ನಗರ ಪ್ರದೇಶಗಳಿಗೆ ವಿಸ್ತರಿಸಲಾಗಿದೆ. |

| | | |
|---|---|---|
| ಇ) | ಭವಿಷ್ಯದಲ್ಲಿ ಇನ್ನೂ ಹೆಚ್ಚಿನ ಪ್ರದೇಶಗಳನ್ನು ಸೇರ್ಪಡಿಸಲು ಈ ನಿಯಮಗಳಲ್ಲಿ ಅವಕಾಶವಿದೆಯೇ; | ಅವಕಾಶವಿದೆ. |
| ಈ) | ಮರಗಳ ಕಟಾವಣೆ ತಡೆಗಟ್ಟಲು ಇನ್ನೂ ಕಠಿಣ ಕಾನೂನು ರೂಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಇರುವುದಿಲ್ಲ. ಮರಗಳ ಕಟಾವಣೆ ತಡೆಗಟ್ಟಲು ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ 1976ರಲ್ಲಿ ಖಾಸಗಿ ಪ್ರದೇಶಗಳಲ್ಲಿಯ ಮರ ಕಟಾವಣೆಗೆ ಕಾನೂನು ಈಗಾಗಲೇ ರಾಜ್ಯದಲ್ಲಿ ಜಾರಿ ಇರುತ್ತದೆ. |

ಸಂಖ್ಯೆ: ಅಪಜೀ 91 ಎಫ್‌ಎಎಫ್ 2020

(ಆನಂದ್ ಸಿಂಗ್)
ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು

# ಅನುಬಂಧ-1

ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಎಫ್‌ಡಿ 100 ಎಫ್‌ಡಿಪಿ 1976 (1) ದಿನಾಂಕ: 20.07.1976 ರ ಮೇರೆಗೆ ರಾಜ್ಯದಲ್ಲಿ ಕರ್ನಾಟಕ ವೃಕ್ಷ ಸಂರಕ್ಷಣಾ ಕಾಯ್ದೆ, 1976 ರ ವ್ಯಾಪ್ತಿಯಡಿ ಇದ್ದ 65 ನಗರ ಪ್ರದೇಶಗಳ ಪಟ್ಟಿ

| ಕ್ರಮ. ಸಂಖ್ಯೆ | ಪ್ರದೇಶಗಳು | ಕ್ರಮ. ಸಂಖ್ಯೆ | ಪ್ರದೇಶಗಳು |
|---|---|---|---|
| 1. | ಬೆಂಗಳೂರು ನಗರ ಪಾಲಿಕೆ | 34. | ಕೊಣನೂರು ಪುರಸಭೆ |
| 2. | ಮೈಸೂರು ನಗರ ಮುನಿಸಿಪಲ್ ಕೌನ್ಸಿಲ್ | 35. | ಬೇಲೂರು ಪುರಸಭೆ |
| 3. | ಮಂಗಳೂರು ನಗರ ಮುನಿಸಿಪಲ್ ಕೌನ್ಸಿಲ್ | 36. | ಹಾಸನ ನಗರಸಭೆ |
| 4. | ಬೆಳಗಾವಿ ನಗರ ಮುನಿಸಿಪಲ್ ಕೌನ್ಸಿಲ್ | 37. | ಸಕಲೇಶಪುರ ಪುರಸಭೆ |
| 5. | ಬೆಳಗಾವಿ ದಂಡು ಪ್ರದೇಶ | 38. | ಚಾಮರಾಜನಗರ ಪುರಸಭೆ |
| 6. | ಹುಬ್ಬಳ್ಳಿ–ಧಾರವಾಡ ಮುನಿಸಿಪಲ್ ಕಾರ್ಪೋರೇಷನ್ | 39. | ಗುಂಡ್ಲುಪೇಟೆ ಪುರಸಭೆ |
| 7. | ಬಳ್ಳಾರಿ ನಗರ ಸಭೆ | 40. | ಹೆಗ್ಗಡದೇವನಕೋಟೆ ಪುರಸಭೆ |
| 8. | ಬಿಜಾಪುರ ನಗರ ಸಭೆ | 41. | ಹುಣಸೂರು ಪುರಸಭೆ |
| 9. | ದಾವಣಗೆರೆ ನಗರ ಸಭೆ | 42. | ಕೊಳ್ಳೆಗಾಲ ಪುರಸಭೆ |
| 10. | ಗುಲ್ಬರ್ಗ ನಗರ ಸಭೆ | 43. | ಪಿರಿಯಾಪಟ್ಟಣ ಪುರಸಭೆ |
| 11. | ರಾಬರ್ಟ್‌ಸನ್ ಪೇಟೆ ಮುನಿಸಿಪಲ್ ಕೌನ್ಸಿಲ್ ಪ್ರದೇಶವನ್ನು ಒಳಗೊಂಡಿರುವ ಕೆ.ಜಿ.ಎಫ್. | 44. | ಎಳಂದೂರು ಪುರಸಭೆ |
| 12. | ಭದ್ರಾವತಿ ಟೌನ್ ಮುನಿಸಿಪಲ್ ಕೌನ್ಸಿಲ್ ಮತ್ತುಅಧಿಸೂಚಿತ ಪ್ರದೇಶ, ಭದ್ರಾವತಿ | 45. | ಸರಗೂರು ಪುರಸಭೆ |
| 13. | ಶಿವಮೊಗ್ಗ ನಗರಸಭೆ | 46. | ಅಂಕೋಲ ಪುರಸಭೆ |
| 14. | ಖಾನಾಪುರ ಪುರಸಭೆ | 47. | ಹೊನ್ನಾವರ ಪುರಸಭೆ |
| 15. | ಚಿಕ್ಕಮಗಳೂರು ಪುರಸಭೆ | 48. | ಹಳಿಯಾಳ ಪುರಸಭೆ |
| 16. | ಮೂಡಿಗೆರೆ ಪುರಸಭೆ | 49. | ಕಮಟ ಪುರಸಭೆ |
| 17. | ಎನ್.ಆರ್. ಪುರಸಭೆ | 50. | ಕಾರವಾರ ಪುರಸಭೆ |
| 18. | ಕೊಪ್ಪ ಪುರಸಭೆ | 51. | ಮುಂಡಗೋಡ ಪುರಸಭೆ |
| 19. | ಶೃಂಗೇರಿ ಪುರಸಭೆ | 52. | ಸಿದ್ದಾಪುರ ಪುರಸಭೆ |
| 20. | ಮಡಿಕೇರಿ ಪುರಸಭೆ | 53. | ಶಿರಸಿ ಪುರಸಭೆ |
| 21. | ಹೆಬ್ಬಾಳ ಪುರಸಭೆ | 54. | ದಾಂಡೇಲಿ ಪುರಸಭೆ |
| 22. | ಕೂಡ್ಲಿಪೇಟೆ ಪುರಸಭೆ | 55. | ಹೊಸನಗರ ಪುರಸಭೆ |
| 23. | ಕುಶಾಲನಗರ ಪುರಸಭೆ | 56. | ಸಾಗರ ಪುರಸಭೆ |
| 24. | ಶನಿವಾರಸಂತೆ ಪುರಸಭೆ | 57. | ಶಿಕಾರಿಪುರ ಪುರಸಭೆ |
| 25. | ಸೋಮವಾರಪೇಟೆ ಪುರಸಭೆ | 58. | ತರೀಕೆರಿ ಪುರಸಭೆ |
| 26. | ಶುಂಠಿಕೊಪ್ಪ ಪುರಸಭೆ | 59. | ಸೊರಬ ಪುರಸಭೆ |
| 27. | ಪೊನ್ನಂಪೇಟೆ ಪುರಸಭೆ | 60. | ಶಿರಾಳಿಕೊಪ್ಪ ಪುರಸಭೆ |
| 28. | ಗೋಣಿಕೊಪ್ಪ ಪುರಸಭೆ | 61. | ತೀರ್ಥಹಳ್ಳಿ ಪುರಸಭೆ |
| 29. | ವಿರಾಜಪೇಟೆ ಪುರಸಭೆ | 62. | ಉಡುಪಿ ಪುರಸಭೆ |
| 30. | ಶಿಗ್ಗಾವಿ ಪುರಸಭೆ | 63. | ಕಾರ್ಕಳ ಪುರಸಭೆ |
| 31. | ಹಾನಗಲ್ ಪುರಸಭೆ | 64. | ಪುತ್ತೂರು ಪುರಸಭೆ |
| 32. | ಕಲಘಟಗಿ ಪುರಸಭೆ | 65. | ಕುಂದಾಪುರ ಪುರಸಭೆ |
| 33. | ಅರಕಲಗೂಡು ಪುರಸಭೆ | | |